ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಗಂಗಾ ಕಲ್ಯಾಣ ಯೋಜನೆಯಲ್ಲಿ ಆಗಿರುವ ಕಾಮಗಾರಿ ಕುರಿತು

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

904 (908) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರವಾರ ಜಿಲ್ಲೆಯಲ್ಲಿ ಕಳೆದ 4 ವರ್ಷಗಳಲ್ಲಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಿಂದ ಕಾರವಾರ ಜಿಲ್ಲೆಗೆ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೊರೆಯಿಸಿರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು ; ಎಷ್ಟು ಕೊಳವೆ ಬಾವಿಗಳಿಗೆ ಸಬ್ ಮರ್ಸಿಬಲ್ ಪಂಪ್ ಅಳವಡಿಸಲಾಗಿದೆ ; ಅಳವಡಿಸಿದ್ದಲ್ಲಿ, ಎಷ್ಟು ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದೆ ; (2015-16, 2016-17, 2017-18, 2018-2019ನೇ ಸಾಲಿನ ಜಿಲ್ಲಾವಾರು/ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ನಿಗಮದ 10 ವಿವಿಧ ಯೋಜನೆಗಳಡಿಯಲ್ಲಿ ಎಷ್ಟು ಫಲಾನುಭವಿಗಳಿಗೆ ಸಾಲ ಸೌಲಭ್ಯ ನೀಡಲಾಗಿದೆ ; ನಿಗಮಕ್ಕೆ 2015-16, 2017-18, 2018-2019ನೇ ಸಾಲಿನಲ್ಲಿ ಬಿಡುಗಡೆಯಾದ ಅನುದಾನ ಎಷ್ಟು ; (ಜಿಲ್ಲಾವಾರು/ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಕಾರವಾರ ಜಿಲ್ಲೆಯಲ್ಲಿ ಎಷ್ಟು ಶಾದಿ ಮಹಲ್‌ಗಳನ್ನು ನಿರ್ಮಾಣ ಮಾಡಲು ಅನುದಾನ ಮಂಜೂರು ಮಾಡಲಾಗಿದೆ ; ಜಿಲ್ಲೆಯಲ್ಲಿ ಎಷ್ಟು ಮುಸ್ಲಿಂ ಕಾಲೋನಿಗಳಲ್ಲಿ ಸಿ.ಸಿ. ರಸ್ತೆ, ಚರಂಡಿ ನಿರ್ಮಾಣ ಮಾಡಲಾಗಿದೆ;

(ಈ) ಅಲ್ಪಸಂಖ್ಯಾತ ಸಮುದಾಯದ ಮುಸ್ಲಿಂ, ಕ್ರಿಶ್ಚಿಯನ್, ಬುದ್ಧ, ಜೈನ್, ಫಾರ್ಸಿ, ಆಂಗ್ಲೋ ಇಂಡಿಯನ್, ಸಿಖ್ ಸಮುದಾಯಗಳ ಅಭಿವೃದ್ಧಿ ಹಾಗೂ ಯೋಜನೆಗಳ ಬಗ್ಗೆ ಜಿಲ್ಲೆಯಲ್ಲಿ ಯಾವುದಾದರೂ ಅರಿವು ಮೂಡಿಸುವ ಕಾರ್ಯಕ್ರಮ ಕೈಗೊಳ್ಳಲಾಗಿದೆಯೇ ? (ಕೈಗೊಂಡಿದ್ದಲ್ಲಿ, 2015-16, 2017-18, 2018-2019ನೇ ಸಾಲಿನ ಸಂಪೂರ್ಣ ಮಾಹಿತಿ ನೀಡುವುದು)